# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1497
2. ಉತ್ತರಿಸ ಬೇಕಾದ ದಿನಾಂಕ : 24.09.2021.
3. ಸದಸ್ಯರು : ಶ್ರೀ ಮರಿತಿಬ್ಬೇಗೌಡ, (ಶಿಕ್ಷಕರ ಕ್ಷೇತ್ರದಿಂದ ಚುನಾಯಿತರಾದವರು)
4. ಉತ್ತರಿಸಬೇಕಾದ ಸಚಿವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರತಿ ಗ್ರಾಮ ಪಂಚಾಯಿತಿಗೆ ಸೋಲಾರ್ ಮೇಲ್ಛಾವಣಿ ವಿದ್ಯುತ್ ಘಟಕ ಅಳವಡಿಸುವ ಕಾರ್ಯಕ್ರಮದ ರೂಪುರೇಷೆಗಳೇನು; (ವಿವರಗಳನ್ನು ನೀಡುವುದು) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ, ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಈಗಿರುವ ವಿದ್ಯುಚ್ಛಕ್ತಿ ಕೊರತೆಯನ್ನು ನೀಗಿಸಲು, ಸಾರ್ವಜನಿಕ ಉದ್ದೇಶಕ್ಕಾಗಿ ನೈಸರ್ಗಿಕವಾಗಿ ನಿರಂತರ ಲಭ್ಯವಿರುವ ಸೌರಶಕ್ತಿ ಮೂಲದಿಂದ ಸೋಲಾರ್ ವಿದ್ಯುತ್ ಅನ್ನು ಉತ್ಪಾದಿಸಿ, ಬಳಕೆ ಮಾಡಿಕೊಳ್ಳಲು, ಇಲಾಖೆಯ ಅಧೀನದಲ್ಲಿ ಬರುವ ಸಂಸ್ಥೆಗಳ ಕಛೇರಿಗಳು, ಜಿಲ್ಲಾ ಪಂಚಾಯತ್ ಜಿಲ್ಲಾ ಪಂಚಾಯತ್ ಅಧೀನದಲ್ಲಿ ಬರುವ ಇಲಾಖಾ ಕಛೇರಿಗಳು, ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯತಿ ಕಛೇರಿ ಕಟ್ಟಡಗಳಲ್ಲಿ ಸೋಲಾರ್ ಮೇಲ್ಛಾವಣಿ ವಿದ್ಯುತ್ ಘಟಕಗಳನ್ನು ಅಳವಡಿಸುವ ಮಹತ್ವಾಕಾಂಕ್ಷಿ ಯೋಜನೆಯು ಚಾಲನೆಯಲ್ಲಿದ್ದು, ಗ್ರಾಮ ಪಂಚಾಯತಿಗಳಲ್ಲಿ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತವನ್ನು ಉಳಿತಾಯಗೊಳಿಸುವುದು ಹಾಗೂ ವಿದ್ಯುತ್ ಉತ್ಪಾದನಾ ಕ್ಷೇತ್ರದಲ್ಲಿ ಸ್ವಾವಲಂಬನೆ ಸಾಧಿಸುವ ಮೂಲಕ ಗ್ರಾಮ ಪಂಚಾಯತಿಗಳನ್ನು ಆರ್ಥಿಕವಾಗಿ ಸಬಲೀಕರಣಗೊಳಿಸುವ ಪ್ರಮುಖ ಉದ್ದೇಶಗಳೊಂದಿಗೆ ಸದರಿ ಯೋಜನೆಯನ್ನು ರೂಪಿಸಲಾಗಿರುತ್ತದೆ. |
| ಆ) | ಸದರಿ ಟೆಂಡರ್ ಪ್ರಕ್ರಿಯೆಯಲ್ಲಿ ಪಾಲಿಸಲಾಗಿರುವ ಮಾನದಂಡಗಳೇನು; | ಭಾರತ ಸರ್ಕಾರದ MNRE ಇಲಾಖೆಯ Norms & Specifications ಗಳನ್ವಯ, ಟೆಂಡರ್ ಮೊದಲನೆ ಹಂತದಲ್ಲಿ ತಾಂತ್ರಿಕ ಬಿಡ್ಡನ್ನು ಆಹ್ವಾನಿಸಿದ್ದು, ಬಿಡ್ಡುದಾರ ಸಂಸ್ಥೆಗಳು ತಮ್ಮ ಬಿಡ್ಡಿನೊಂದಿಗೆ ಸಲ್ಲಿಸಿದ್ದ ತಾಂತ್ರಿಕ ದಾಖಲೆಗಳನ್ನು ಮೌಲ್ಯ ಮಾಪನಗೊಳಿಸಲಾಗಿರುತ್ತದೆ.<br><br>ಸೋಲಾರ್ ವಿದ್ಯುತ್ ಘಟಕಕ್ಕೆ ಸಂಬಂಧಿಸಿದಂತೆ, ಬಿಡ್ಡುದಾರ ಸಂಸ್ಥೆಗಳು Procurement Portal ನಲ್ಲಿ ಅಪ್ ಲೋಡ್ ಮಾಡಿದ್ದ ವಿವಿಧ ಉಪಕರಣಗಳನ್ನು Demonstration Committee ಯ ಮುಖೇನ ತಪಾಸಣೆಗೊಳಪಡಿಸಿದ ನಂತರ, ನಿಗದಿತ ತಯಾರಿಕಾ ಸಂಸ್ಥೆಗಳ ಉಪಕರಣಗಳಿಗೆ ಅನುಮೋದನೆ ನೀಡಲಾಗಿರುತ್ತದೆ.<br><br>ತಾಂತ್ರಿಕ ಬಿಡ್ಡಿನಲ್ಲಿ ಯಶಸ್ವಿಯಾದ ಐದು ಅರ್ಹ ಗುತ್ತಿಗೆದಾರ ಸಂಸ್ಥೆಗಳಿಗೆ, ಸೋಲಾರ್ ವಿದ್ಯುತ್ ಘಟಕ ಅಳವಡಿಕೆಗೆ ಸಂಬಂಧಿಸಿದಂತೆ ಏಕರೂಪ ದರವನ್ನು ನಿಗದಿಪಡಿಸಲು ಆರ್ಥಿಕ ಬಿಡ್ಡನ್ನು ಆಹ್ವಾನಿಸಿ, ಸದರಿ ಸಂಸ್ಥೆಗಳು ಒದಗಿಸಿದ್ದ ದರ ಪಟ್ಟಿಗಳ ಪೈಕಿ ಕನಿಷ್ಠ ದರವನ್ನು ಪರಿಗಣಿಸಿದ್ದು, ಎಲ್ಲಾ ಐದು ಸಂಸ್ಥೆಗಳಿಗೆ ಅನ್ವಯಿಸುವಂತೆ ಏಕರೂಪ ದರವನ್ನು ನಿಗದಿಪಡಿಸಿ, ಸೋಲಾರ್ ವಿದ್ಯುತ್ ಘಟಕ ಅಳವಡಿಕೆಯ ನಿಮಿತ್ತ ಸಾಮರ್ಥ್ಯವಾರು ದರಗಳೊಂದಿಗೆ, ಜಿಲ್ಲೆಗಳನ್ನು ಹಂಚಿಕೆಮಾಡಿ, Letter of Acceptance ನೀಡಲಾಗಿರುತ್ತದೆ. |

| | | |
|---|---|---|
| ಇ) | ಪ್ರತಿ ಗ್ರಾಮ ಪಂಚಾಯತಿಗೆ ಸೋಲಾರ್ ಮೇಲ್ಛಾವಣಿ ವಿದ್ಯುತ್ ಘಟಕ ಅಳವಡಿಕೆಗೆ ಸರ್ಕಾರ ಟೆಂಡರ್ ಪ್ರಕಾರ ನಿಗದಿಪಡಿಸಿರುವ ಮೊತ್ತವೆಷ್ಟು? | ಘಟಕಗಳ ನಿರ್ಮಾಣಕ್ಕಾಗಿ ಟೆಂಡರ್ ಮುಖೇನ ಅಂತಿಮಗೊಳಿಸಿರುವ ದರ ಪಟ್ಟಿಗಳು: (see table below) ಮೇಲ್ಕಂಡ ದರಗಳು, 5 ವರ್ಷದ ವಾರಂಟಿ ಅವಧಿಯ ಜೊತೆಗೆ, ವಾರಂಟಿ ಅವಧಿಯ ನಂತರ, 5 ವರ್ಷಗಳ ಸಮಗ್ರ ನಿರ್ವಹಣಾಗುತ್ತಿಗೆಯನ್ನೂ ಸಹ ಒಳಗೊಂಡಿರುತ್ತವೆ. |
| ಈ) | ಟೆಂಡರ್ ಪ್ರಕ್ರಿಯೆಯನ್ನು ಸರ್ಕಾರದ ಹಂತದಲ್ಲಿ ಪೂರ್ಣಗೊಳಿಸಿದ್ದು, ಅದಕ್ಕೆ ಸಂಬಂಧಿಸಿದಂತಹ ಮೊತ್ತವನ್ನು ಗ್ರಾಮ ಪಂಚಾಯತಿಗಳು ಪಾವತಿಸುವಂತೆ ಸೂಚಿಸಲು ಕಾರಣಗಳೇನು? (ವಿವರಗಳೊಂದಿಗೆ ಮಾಹಿತಿ) | ಇತ್ತೀಚಿನ ವರ್ಷಗಳಲ್ಲಿ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರಗಳಿಂದ ಸೋಲಾರ್ ವಿದ್ಯುತ್ ಘಟಕ ಅಳವಡಿಕೆಗಾಗಿ ಪ್ರತ್ಯೇಕವಾಗಿ ಯಾವುದೇ ಯೋಜನೆಗಳಲ್ಲಿ ಅನುದಾನವನ್ನು ಒದಗಿಸಿರುವುದಿಲ್ಲ. ಆದರೆ, ಪಂಚಾಯತ್ ರಾಜ್ ಸಂಸ್ಥೆಗಳು ಜನಮುಖಿಯಾಗಿ ಕಾರ್ಯನಿರ್ವಹಿಸುವುದಕ್ಕಾಗಿ ಹಾಗೂ ಸೋಲಾರ್ ವಿದ್ಯುತ್ ಬಳಕೆಯ ಮೂಲಕ ಕಛೇರಿ ಕೆಲಸಗಳನ್ನು ನಿರಂತರವಾಗಿ ಹಾಗೂ ಸುಗಮವಾಗಿ ನಿರ್ವಹಿಸಬೇಕೆಂಬ ಸದುದ್ದೇಶದೊಂದಿಗೆ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿರುತ್ತದೆ. ಸರ್ಕಾರದ ಹಂತದಲ್ಲಿ ಟೆಂಡರ್ ಪ್ರಕ್ರಿಯೆಗಳನ್ನು ಜರುಗಿಸಿ, ಅರ್ಹ ಐದು ಗುತ್ತಿಗೆ ದಾರ ಸಂಸ್ಥೆಗಳನ್ನು ಆಯ್ಕೆ ಮಾಡಿದ್ದು, ಸೋಲಾರ್ ವಿದ್ಯುತ್ ಘಟಕಗಳ ಸಾಮರ್ಥ್ಯವಾರು ದರಗಳೊಂದಿಗೆ, ಜಿಲ್ಲಾವಾರು ಹಂಚಿಕೆ ಮಾಡಲಾಗಿರುತ್ತದೆ. ಮಾರ್ಗಸೂಚಿಯಲ್ಲಿ ತಿಳಿಸಿರುವಂತೆ, 15ನೇ ಹಣಕಾಸು ಅನುದಾನ, ಅಭಿವೃದ್ಧಿ ಅನುದಾನ, ಗ್ರಾಮ ಪಂಚಾಯತಿಗಳ ಸ್ವಂತ ಸಂಪನ್ಮೂಲಗಳು ಹಾಗೂ ಲಭ್ಯವಿರುವ ಇತರ ಯೋಜನೆಗಳ ಅನುದಾನಗಳನ್ನು ಸಮರ್ಪಕವಾಗಿ ಬಳಸಿಕೊಂಡು ಸೋಲಾರ್ ವಿದ್ಯುತ್ ಘಟಕ ಅಳವಡಿಕೆಯ ಯೋಜನೆಯನ್ನು ಅನುಷ್ಠಾನಗೊಳಿಸುವಂತೆ ಗ್ರಾಮ ಪಂಚಾಯತಿಗಳಿಗೆ ನಿರ್ದೇಶನ ನೀಡಲಾಗಿರುತ್ತದೆ. |

ದರ ಪಟ್ಟಿಗಳು (item ಇ):

| ಕ್ರ ಸಂ | ಸಾಮರ್ಥ್ಯ | Package with 1 Hour Backup **ದರಗಳು** (Including GST) | Package with 2 Hours Backup **ದರಗಳು** (Including GST) |
|---|---|---|---|
| 1 | 1 ಕಿಲೋವ್ಯಾಟ್ | ರೂ.2,54,000/- | ರೂ.2,76,000/- |
| 2 | 2 ಕಿಲೋವ್ಯಾಟ್ | ರೂ. 4,65,000/- | ರೂ. 4,99,000/- |
| 3 | 3ಕಿಲೋವ್ಯಾಟ್ | ರೂ. 6,30,000/- | ರೂ. 6,68,000/- |
| 4 | 4ಕಿಲೋವ್ಯಾಟ್ | ರೂ. 7,90,000/- | ರೂ. 8,50,000/- |
| 5 | 5ಕಿಲೋವ್ಯಾಟ್ | ರೂ. 9,00,000/- | ರೂ. 9,80,000/- |
| 6 | 10ಕಿಲೋವ್ಯಾಟ್ | ರೂ. 16,40,000/- | ರೂ. 17,30,000/- |

ಸಂ. ಗ್ರಾಅಪ 375 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು